ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ನಗರಾಭಿವೃದ್ಧಿ ಇಲಾಖೆಯ ಅಧೀನದಲ್ಲಿ ಬರುವ ನಿಗಮಗಳ ಕುರಿತು

ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ(ಪದವೀಧರರ ಕ್ಷೇತ್ರ):-

1565 (1842) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ನಗರಾಭಿವೃದ್ಧಿ ಇಲಾಖೆಯ ಅಧೀನದಲ್ಲಿ ಬರುವ ಸಾರ್ವಜನಿಕ ನಿಗಮಗಳು/ಕಂಪನಿಗಳು, ಶಾಸನಬದ್ಧ ಮಂಡಳಿಗಳು, ಉದ್ದಿಮೆಗಳು, ಅಂಗ ಸಂಸ್ಥೆಗಳು ಮತ್ತು ಸೊಸೈಟಿಗಳು ಹಾಗೂ ಇತರೆ ಎಷ್ಟಿವೆ ; ಇವು ಯಾವುವು ; (ಇಲಾಖೆವಾರು, ಕೇಂದ್ರ ಕಛೇರಿ, ವಿಳಾಸ ಹಾಗೂ ದೂರವಾಣಿ ಸಂಖ್ಯೆಗಳನ್ನು ಒಳಗೊಂಡಂತೆ ವಿವರವಾದ ಮಾಹಿತಿ ನೀಡುವುದು)

(ಆ) ಸದರಿ ಇಲಾಖೆಯಡಿ ಹಾಲಿ ಜಾರಿಯಲ್ಲಿರುವ ಕೇಂದ್ರ ಸರ್ಕಾರದ ಪುರಸ್ಕೃತ/ಪ್ರಾಯೋಜಿತ/ಇತರೆ ಯೋಜನೆಗಳಾವುವು ; 2019-2020 ನೇ ಸಾಲಿನಲ್ಲಿ ಸದರಿ ಯೋಜನೆಗಳಿಗೆ ಬಿಡುಗಡೆಯಾದ ಹಣ ಎಷ್ಟು ; ಇನ್ನೂ ಎಷ್ಟು ಹಣ ಬರಬೇಕಿದೆ; ಯೋಜನಾವಾರು ಮಾಹಿತಿ ನೀಡುವುದು ;

(ಇ) ಕಳೆದ 3 ವರ್ಷಗಳಿಂದ ಇಲಾಖೆಯ ಅಧೀನದಲ್ಲಿ ಬರುವ ಸಂಸ್ಥೆಗಳು ಎಷ್ಟು ಹಣವನ್ನು ಬ್ಯಾಂಕ್‌ನಲ್ಲಿ ಎಫ್.ಡಿ. ಇಟ್ಟಿವೆ ; ಎಫ್.ಡಿ. ಇಡಲು ಕಾರಣಗಳೇನು ; ಇದಕ್ಕೆ ಸರ್ಕಾರದಿಂದ ಅನುಮತಿ ಪಡೆಯಲಾಗಿದೆÉಯೇ ; (ವಿವರವಾದ ಮಾಹಿತಿ ನೀಡುವುದು)

(ಈ) ಎಫ್.ಡಿ. ಇಟ್ಟ ಹಣವನ್ನು ಸಂಬಂಧಪಟ್ಟ ಯೋಜನೆಗಳಿಗೆ ಯಾವಾಗ ಉಪಯೋಗಿಸಲಾಗುವುದು ? (ಸಂಸ್ಥೆವಾರು ವಿವರವಾದ ಮಾಹಿತಿ ನೀಡುವುದು)